# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1268 |
| ಮಾನ್ಯ ಸದಸ್ಯರ ಹೆಸರು | ಶ್ರೀ ಕೆ.ಎ. ತಿಪ್ಪೇಸ್ವಾಮಿ<br>(ನಾಮನಿರ್ದೇಶನ ಹೊಂದಿದವರು) |
| ಉತ್ತರಿಸಬೇಕಾದ ದಿನಾಂಕ | 24.12.2021 |
| ಉತ್ತರಿಸುವ ಸಚಿವರು | ಮಾನ್ಯ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು. |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಸರ್ಕಾರವು 2021-22ನೇ ಸಾಲಿನ ಆಯ-ವ್ಯಯದಲ್ಲಿ ರಾಜ್ಯದ ಎಲ್ಲಾ ಜಿಲ್ಲಾ ಕೇಂದ್ರ ಸ್ಥಾನದಲ್ಲಿರುವ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಗೆ ಸೇರಿದ ಖಾಲಿ ನಿವೇಶನಗಳಲ್ಲಿ ಸಾರ್ವಜನಿಕ-ಖಾಸಗಿ ಸಹಭಾಗಿತ್ವದ ಅಡಿಯಲ್ಲಿ 150 ವಿದ್ಯಾರ್ಥಿ ನಿಲಯಗಳ ಕಟ್ಟಡ ನಿರ್ಮಾಣ ಕಾಮಗಾರಿಗಳನ್ನು ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ಅಧೀನದಲ್ಲಿರುವ ಸ್ವಂತ ಕಟ್ಟಡ ಹೊಂದಿರುವ ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳಲ್ಲಿನ ಸಂಖ್ಯಾ ಬಲವನ್ನು ಶೇಕಡಾ 5 ರಷ್ಟು ಹೆಚ್ಚಿಸಲಾಗುವುದು, ಇದರಿಂದ 5000 ಹಿಂದುಳಿದ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿನಿಲಯಗಳಲ್ಲಿ ಅವಕಾಶ ಕಲ್ಪಿಸಿದಂತಾಗುತ್ತದೆ ಮತ್ತು ಈ ಉದ್ದೇಶಕ್ಕಾಗಿ 10 ಕೋಟಿ ರೂಗಳನ್ನು ಒದಗಿಸಲಾಗುವುದೆಂದು ಘೋಷಿಸಿದ್ದು, ಈ ಕಾರ್ಯಕ್ರಮಗಳು ಯಾವ ಹಂತದಲ್ಲಿವೆ; ಹಾಗೂ ಇದುವರೆಗೂ ಇಲಾಖೆಗಳಿಗೆ ಬಿಡುಗಡೆ ಮಾಡಿದ ಅನುದಾನ ಎಷ್ಟು; ವಿವರ ಒದಗಿಸುವುದು; | 2021-22ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಜಿಲ್ಲಾ ಕೇಂದ್ರ ಸ್ಥಾನದಲ್ಲಿರುವ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಗೆ ಸೇರಿದ ಖಾಲಿ ನಿವೇಶನಗಳಲ್ಲಿ ಸಾರ್ವಜನಿಕ-ಖಾಸಗಿ ಸಹಭಾಗಿತ್ವದ ಅಡಿಯಲ್ಲಿ 150 ವಿದ್ಯಾರ್ಥಿ ನಿಲಯಗಳ ಕಟ್ಟಡ ನಿರ್ಮಾಣ ಕಾಮಗಾರಿಗಳನ್ನು ಕೈಗೊಳ್ಳಲಾಗುವುದು ಎಂದು ಘೋಷಿಸಲಾಗಿರುತ್ತದೆ.<br><br>ಮೂಲ ಸೌಲಭ್ಯ ಅಭಿವೃದ್ಧಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯ ಅಪರ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ದಿನಾಂಕ: 09.07.2021 ರಂದು ನಡೆದ ಸಭೆಯಲ್ಲಿ ಪ್ರಥಮ ಪ್ರಯತ್ನವಾಗಿ ಬೆಂಗಳೂರು ನಗರ/ ಮೈಸೂರು/ ಧಾರವಾಡ / ಕಲಬುರಗಿ ಜಿಲ್ಲೆಯ 15 ಸ್ಥಳಗಳಲ್ಲಿ ಭಾರತ ಸರ್ಕಾರದ ಸಾರ್ವಜನಿಕ ಖಾಸಗಿ ಸಹಬಾಗಿತ್ವ (PPP) ಯೋಜನೆಯಡಿಯಲ್ಲಿ Vaibility Gap Funding (VGF) ಮೂಲಕ ಅನುದಾನ ಪಡೆಯಲು ಅಗತ್ಯವಿರುವ ಎಲ್ಲಾ ಅಧ್ಯಯನ ವರದಿಗಳು, ಸಂಗ್ರಹಣಾ ದಾಖಲಾತಿಗಳನ್ನು ತಯಾರಿಸುವ ಸಲಹೆಗಾರರನ್ನು ಸಂಗ್ರಹಣಾ ಪ್ರಕ್ರಿಯೆಯ ಮುಖಾಂತರ ಆಯ್ಕೆ ಮಾಡಲು ಕ್ರಮವಹಿಸಲು ವ್ಯವಸ್ಥಾಪಕ ನಿರ್ದೇಶಕರು, ಕೆಎಸ್‌ಐಐಡಿಸಿ ರವರಿಗೆ ಸೂಚಿಸಲಾಗಿರುತ್ತದೆ. ಅದರನ್ವಯ ವ್ಯವಸ್ಥಾಪಕ ನಿರ್ದೇಶಕರು, ಕೆಎಸ್‌ಐಐಡಿಸಿ ಇವರು ಸಂಗ್ರಹಣಾ ಪ್ರಕ್ರಿಯೆಯ ಮುಖಾಂತರ ಮೆ॥ ಐಡೆಕ್ ಲಿ., ಇವರನ್ನು ಅಧ್ಯಯನ ವರದಿ ಹಾಗೂ ಸಂಗ್ರಹಣಾ ದಾಖಲಾತಿಗಳನ್ನು ತಯಾರಿಸುವ ಸಲಹೆಗಾರರನ್ನಾಗಿ (Transaction Adviser) ಆಯ್ಕೆ ಮಾಡಿರುತ್ತಾರೆ.<br><br>ಮೂಲ ಸೌಲಭ್ಯ ಅಭಿವೃದ್ಧಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯಿಂದ ಈ ವರದಿ ಬಂದ ಕೂಡಲೇ ಸಕ್ಷಮ ಪ್ರಾಧಿಕಾರದ ಅನುಮತಿ ಪಡೆದು ನಿಯಮಾನುಸಾರ ಮುಂದಿನ ಕ್ರಮ ತೆಗೆದುಕೊಳ್ಳುವ ಬಗ್ಗೆ ಪರಿಶೀಲಿಸಲಾಗುವುದು. |